# ಕಾನನ

ನಿಸರ್ಗದೆಡೆಗೆ ಪಯಣ



ಮುಖಪುಟ

ಕಡವೆ

ಸೆಪ್ಟೆಂಬರ್–2022

Wildlife Conservation Group

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಮನೋಜ್ ಗನ್ನಾ

**ಪರಿಷ್ಕರಣೆ**

ಮುರಳಿ ಎಸ್.

ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು




# ಅಡವಿ ಬಿಕ್ಕೆ

**ಸಾಮಾನ್ಯ ಹೆಸರು: Indian Boxwood**

**ವೈಜ್ಞಾನಿಕ ಹೆಸರು: *Gardenia latifolia***



© ನಾಗೇಶ್ ಓ. ಎಸ್. ಅಡವಿ ಬಿಕ್ಕೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಹಿಮಾಲಯದ ತಪ್ಪಲು, ಮಧ್ಯಭಾರತ ಮತ್ತು ದಖನ್ ಪ್ರಸ್ಥಭೂಮಿಯ ಒಣ ಪ್ರದೇಶಗಳಲ್ಲಿ ಕಂಡುಬರುವ ಈ ಸಸ್ಯವು ಶ್ರೀಲಂಕಾದಲ್ಲಿಯೂ ಕಂಡುಬಂದಿರುವ ಬಗ್ಗೆ ವರದಿಯಾಗಿದೆ. ಅಡವಿ ಬಿಕ್ಕೆ ಮರ ಎಂದು ಕರೆಯಲ್ಪಡುವ ಈ ಮರ ಎಲೆ ಉದುರುವ ಕಾಡುಗಳಲ್ಲಿ ಸುಮಾರು 6 ರಿಂದ 10 ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಈ ಮರದ ತೊಗಟೆಯು ನಯವಾದ ಬೂದು ಬಣ್ಣದಿಂದ ಕೂಡಿದ್ದು, ಎಲೆಗಳು ಸಾಮಾನ್ಯ ವಿನ್ಯಾಸವನ್ನು ಹೊಂದಿದ್ದು ಸರಿ ಸುಮಾರು 5 ರಿಂದ 10 ಸೆಂಟಿ ಮೀಟರ್ ಉದ್ದವಿರುತ್ತವೆ. ಈ ಮರದಲ್ಲಿ ಸುವಾಸನೆ ಭರಿತ ಬಿಳಿ ಬಣ್ಣದ ಹೂಗಳು ಕೊಂಬೆಯ ತುದಿಯಲ್ಲಿದ್ದು, ಗಂಟೆ ಆಕಾರದಲ್ಲಿರುತ್ತವೆ ಹಾಗು ಸುಮಾರು 10 ಸೆಂಟಿಮೀಟರ್ ಉದ್ದವಿರುತ್ತವೆ. ಒಂದು ದಿನದ ನಂತರ ಬಾಡುವ ಈ ಮರದ ಹೂಗಳು ಹಳದಿ ಕಿತ್ತಳೆ ಬಣ್ಣಕ್ಕೆ ತಿರುಗುತ್ತವೆ. ಈ ಮರದ ಕಾಯಿಯು ಅಂಡಾಕಾರದಲ್ಲಿದ್ದು, ಒಳಗೆ ಹಲವಾರು ಬೀಜಗಳಿರುತ್ತವೆ. ಬೂದು ಬಣ್ಣದ ಇದರ ಹಣ್ಣುಗಳು ಸುಮಾರು 3 ರಿಂದ 5 ಸೆಂಟಿ ಮೀಟರ್ ದಪ್ಪವಿರುತ್ತವೆ. ಹೊಟ್ಟೆ ನೋವು, ಜ್ವರ, ಚರ್ಮಕ್ಕೆ ಸಂಬಂಧಿಸಿದ ಕಾಯಿಲೆಗಳಿಗೆ ಔಷಧಿ ತಯಾರಿಸಲು ಈ ಮರದ ಭಾಗಗಳನ್ನು ಉಪಯೋಗಿಸುತ್ತಾರೆ.




# ನೀಲಿ ಬಾಲದ ಕಳ್ಳಿಪೀರ ಪಕ್ಷಿಗಳ ಪ್ರಣಯ ನಿವೇದನೆ...

ಶುಭ್ರ ನೀಲಿ ಆಗಸ... ಬಿರು ಬೇಸಿಗೆಯ ಕಾಲ... ಪಕ್ಕದಲ್ಲೇ ಹರಿಯುತ್ತಿರುವ ಕಾವೇರಿ ನದಿ... ಬೆಳಗಿನ ಆಹ್ಲಾದ ವಾತಾವರಣ... ಸೂರ್ಯನ ಪ್ರಖರತೆ ಆಗಲೇ ಕಾವು ಹೆಚ್ಚಿಸತೊಡಗಿತ್ತು. ನಾವು ಶ್ರೀರಂಗಪಟ್ಟಣದ ಸುತ್ತ ಮುತ್ತ ತಲುಪಿದಾಗ ಹಿಂಡು ಹಿಂಡು ನೀಲಿ ಬಾಲದ ಕಳ್ಳಿಪೀರ ವಲಸೆ ಹಕ್ಕಿಗಳು ತಮ್ಮ ಹಾರಾಟ, ಕಲರವದಿಂದ ದಿನಚರಿ ಪ್ರಾರಂಭಿಸಿದ್ದವು.




ನಾನು ಇವುಗಳ ಚಲನ ವಲನ ಗಮನಿಸುತ್ತಾ ಫ಼ೋಟೋ ತೆಗೆಯುತ್ತಿದ್ದೆ. ಆಗ ಎರಡು ಗಂಡು ಕಳ್ಳಿಪೀರ ಹಕ್ಕಿಗಳು ತಮ್ಮ ಬಾಯಿಯಲ್ಲಿ ಬೇಟೆಯನ್ನು ಹಿಡಿದುಕೊಂಡು ಹೆಣ್ಣು ಹಕ್ಕಿಯನ್ನು ಒಲೈಸಿಕೊಳ್ಳಲು ಸರ್ಕಸ್ ಮಾಡ್ತಾ ಇದ್ದವು. ನೋಡೋಣ ಇವುಗಳ ಪ್ರಣಯ, ಪ್ರೇಮ ಪ್ರಸಂಗ ಅಂತ ನಾನೂ ಕಾದು ಕುಳಿತೆ. ದೂರದಲ್ಲಿ ಜೋಡಿ ಕಪ್ಪು ಬಿಳಿ ಮಿಂಚುಳ್ಳಿಗಳು ತಮ್ಮ ಪಾಡಿಗೆ ತಾವು ಬೆಳಗಿನ ಆಹಾರಕ್ಕೆ ಆಕಾಶದಿಂದ ಚಂಗ್ ಎಂದು ತಣ್ಣಗೆ ಹರಿಯುತ್ತಿದ್ದ ಕಾವೇರಿ ನದಿಯಲ್ಲಿ ಮುಳುಗಿ ಮೀನು ಹಿಡಿದು ತಿನ್ನಲು ಪ್ರಾರಂಭಿಸಿದ್ದವು. ಸಮೀಪದಲ್ಲೇ ನವಿಲಿನ ಜೋರಾದ ಕೂಗುವ ಶಬ್ದ, ಮುನಿಯ ಹಾಗು ರಾಟವಾಳ ಹಕ್ಕಿಗಳ ಚಿಲಿಪಿಲಿ ಸದ್ದು, ಗೀಜಗ ಹಕ್ಕಿಗೂಡು ಕಟ್ಟುವ ಸೊಬಗು... ಇವುಗಳನ್ನೆಲ್ಲಾ ನೋಡುತ್ತಿದ್ದೆನಾದರೂ ಈ ಗಂಡು ನೀಲಿ ಬಾಲದ ಕಳ್ಳಿಪೀರ ಹೆಣ್ಣನ್ನು ವರಿಸುವ ಪರಿ ಏಕೋ ಹೆಚ್ಚು ಗಮನ ಸೆಳೆಯಿತು.




ಎರಡು ಗಂಡು ಹಕ್ಕಿಗಳು ತಲಾ ಒಂದೊಂದು ಸಣ್ಣ ಕೊಂಬೆ ಮೇಲೆ ಕುಳಿತು ಹೆಣ್ಣು ಹಕ್ಕಿಯ ಹತ್ತಿರ ಹೋಗಲು ಹಾತೊರೆಯುತ್ತಿದ್ದವು. ಈ ಗಂಡು ಹಕ್ಕಿಗಳ ಪ್ರಸ್ತಾವನೆಯನ್ನು ಒಪ್ಪದ ಹೆಣ್ಣು ಹಕ್ಕಿ ದೂರ ಓಡಿ ಹೋಗುತ್ತಿತ್ತು. ಕೆಲ ಸಮಯದ ಬಳಿಕ ಅದೇ ಕೊಂಬೆಯ ಹತ್ತಿರ ಬರುತ್ತಾ ಇತ್ತು. ಇದೇ ರೀತಿ ಕೆಲವು ವಿಫಲ ಪ್ರಯತ್ನದ ಬಳಿಕ ಒಂದು ಗಂಡು ಹಕ್ಕಿ ತನ್ನ ನಿವೇದನೆ ತೋಡಿಕೊಂಡಿತು. ಅದರ ಬಾಯಿಯಲ್ಲಿ ಇದ್ದ ಹುಳುವನ್ನು ತಿಂದು ಹೆಣ್ಣು ಹಕ್ಕಿ ಅದರ ಸಾಂಗತ್ಯ ಬೆಳೆಸಿತು. ಇನ್ನೊಂದು ಗಂಡು ಹಕ್ಕಿ ಹತ್ತಿರ ಬಂದು, ಮುನಿಸಿಕೊಂಡು, ಇವುಗಳ ಪ್ರಣಯ ಲೀಲೆ ನೋಡಿ ಹಾರಿ ಹೊಯ್ತು.




ನೀಲಿ ಬಾಲದ ಕಳ್ಳಿಪೀರ ಅಥವಾ ನೀಲಿ ಬಾಲದ ಪತ್ರಂಗ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಈ ಹಕ್ಕಿಯು Meropidae ಎನ್ನುವ ಫ್ಯಾಮಿಲಿಗೆ ಸೇರಿದೆ. ಈ ಹಕ್ಕಿಗಳ ವಾಸಸ್ಥಾನ ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ನೇಪಾಳ, ಮ್ಯನ್ಮಾರ್, ಚೈನಾ, ಶ್ರೀಲಂಕಾ ಮತ್ತು ಆಗ್ನೇಯ ಏಷ್ಯಾದ ದೇಶಗಳು. ಈ ಹಕ್ಕಿಯು ನೋಡಲಿಕ್ಕೆ ಬೇರೆ ಕಳ್ಳಿಪೀರ ಹಕ್ಕಿಗಳ ತರಹ ಕಂಡರು, ತನ್ನ ಗಾಢವಾದ ಎದ್ದು ಕಾಣುವ ಹಸಿರು ಮತ್ತು ಕಂದು ಮಿಶ್ರಿತ ಬಣ್ಣದಿಂದ ಪ್ರತ್ಯೇಕವಾಗಿ ಗುರುತಿಸಲ್ಪಡುತ್ತವೆ. ಇದರ ಬಾಲ ಉದ್ದವಾಗಿ ನೀಲಿ ಬಣ್ಣಕ್ಕೆ ಇರುವುದರಿಂದ ಇದಕ್ಕೆ "ಬ್ಲೂಟೈಲ್ಡ್ ಬೀ ಈಟರ್" ಅಂತ ಹೆಸರು. ಇದರ ಕೊಕ್ಕು ಕಪ್ಪುಬಣ್ಣವಿದ್ದು, ಕತ್ತಿನ ಕೆಳಭಾಗದಲ್ಲಿ ಹಳದಿ ಮತ್ತು ಕಂದು ಮಿಶ್ರಿತ ಬಣ್ಣದಿಂದ ಕೂಡಿರುತ್ತದೆ. ವಯಸ್ಕ ಹಕ್ಕಿಗಳು ಸಾಮಾನ್ಯವಾಗಿ 23 ರಿಂದ 26 ಸೆಂಟಿಮೀಟರ್ ಉದ್ದ ಬೆಳೆಯುತ್ತವೆ. ಗಂಡು ಮತ್ತು ಹೆಣ್ಣು ಹಕ್ಕಿ ಸಾಮಾನ್ಯವಾಗಿ ಒಂದೇ ರೀತಿಯಾಗಿ ಕಾಣಿಸುತ್ತವೆ. ಹಾಗೆ ತೂಕ 30 ರಿಂದ 40 ಗ್ರಾಂ ಅಷ್ಟೇ. ಈ ನೀಲಿ ಬಾಲದ ಕಳ್ಳಿಪೀರ ಹಕ್ಕಿಗಳು ನಮಗೆ ಹೆಚ್ಚಾಗಿ ಕಾಣಸಿಗುವ ಜಾಗವೆಂದರೆ ನದಿ ನೀರಿನ ಹತ್ತಿರ ಮತ್ತು ಅದರ ದಡದಲ್ಲಿ. ಈ ಪ್ರಭೇದಕ್ಕೆ ಸೇರಿರುವ ಎಲ್ಲಾ ಕಳ್ಳಿಪೀರ ಹಕ್ಕಿಗಳು ಹಾರಾಡುತ್ತಲೇ ತಮ್ಮ ಆಹಾರವನ್ನು ಬೇಟೆಯಾಡಿ ತಿನ್ನುತ್ತವೆ.

ಇದರ ಆಹಾರ ಪದ್ಧತಿ ಚಿಟ್ಟೆ, ಜೇನ್ನೊಣ, ದುಂಬಿ, ಜೇಡ, ಡ್ರಾಗನ್ ಫ್ಲೈ ಮತ್ತು ಜೀರುಂಡೆ ಮುಂತಾದವು. ಹಾರುತ್ತ ಹಾರುತ್ತ ಇವುಗಳು ಬೇಟೆಯಾಡುವ ರೀತಿಯನ್ನು ನೋಡಬೇಕು ಅದು ಒಂಥರಾ ಕಣ್ಣಿಗೆ ಹಬ್ಬ. ಎಷ್ಟು ಬೇಗನೆ ಆಕಾಶಕ್ಕೆ ನೆಗೆದು, ಅಷ್ಟೇ ಚಾಕಚಕ್ಯತೆಯಿಂದ ತನ್ನ ಆಹಾರವನ್ನು ಬಾಯಿಯಲ್ಲಿ ಹಿಡಿದು, ಮೊದಲು ಕೂತಿದ್ದ ಜಾಗಕ್ಕೆ ಬಂದು ಕುಳಿತುಕೊಳ್ಳುತ್ತವೆ. ಆಮೇಲೆ ತಾನು ಹಿಡಿದ ಆಹಾರವನ್ನು ಮೇಲೆಸೆದು, ಅದನ್ನು ಸಾಯಿಸಿ ತಿನ್ನುತ್ತವೆ. ನದಿ ನೀರಿನ ಹತ್ತಿರ ಹಾಗೂ ಅದರ ದಂಡೆಗಳಲ್ಲಿ ಅದರ ಅಕ್ಕಪಕ್ಕದಲ್ಲಿ ಬೆಳೆದಿರುವ ಗಿಡ ಮರಗಳಲ್ಲಿ ಯಥೇಚ್ಛವಾಗಿ ಈ ಹಕ್ಕಿಗಳಿಗೆ ಬೇಕಾದ ಆಹಾರ ಸಿಗುವುದರಿಂದ ಕಳ್ಳಿಪೀರ ಹಕ್ಕಿಗಳು ನೀರಿರುವ ಸ್ಥಳದಲ್ಲಿ ಜಾಸ್ತಿ ಕಂಡುಬರುತ್ತವೆ. ಇದರ ಮುಖ್ಯ ವಾಸಸ್ಥಳ ಜೌಗು ಪ್ರದೇಶ, ಹರಿಯುವ ನದಿ, ಚಿಕ್ಕ-ಚಿಕ್ಕ ಝರಿ, ಕುರುಚಲು ಕಾಡು ಮುಂತಾದವು.

ಇವು ಸಾಮಾನ್ಯವಾಗಿ ವಲಸೆ ಹಕ್ಕಿಗಳು. ಸಂತಾನ ಅಭಿವೃದ್ಧಿ ಕಾಲದಲ್ಲಿ ಅಂದರೆ ಫೆಬ್ರುವರಿಯಿಂದ ಜೂನ್ ತನಕ ದಕ್ಷಿಣ ಭಾರತದ ಹಾಗೂ ದಕ್ಷಿಣ ಏಷ್ಯಾದ ಹಲವು ಪ್ರದೇಶಗಳಿಗೆ ವಲಸೆ ಬರುತ್ತವೆ.




ನಮ್ಮಲ್ಲಿ ಅಂದರೆ ಕರ್ನಾಟಕದ ಕಾವೇರಿ ನದಿ ತೀರ ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಈ ಹಕ್ಕಿಗಳು ಬೇರೆ ಕಳ್ಳಿಪೀರ (ಬೀ ಈಟರ್) ಹಕ್ಕಿಗಳ ಹಾಗೆ ಕುಹರದ ಗೂಡನ್ನು ಕಟ್ಟುತ್ತವೆ (ಕ್ಯಾವಿಟಿ ನೆಸ್ಟರ್ಸ್). ಅಂದರೆ ನದಿ ಬದಿಯ ದಿಬ್ಬ ಹಾಗು ದಡದಲ್ಲಿ ಬಿಲವನ್ನು ಕೊರೆದು ಗೂಡು ಕಟ್ಟಿಕೊಳ್ಳುತ್ತವೆ. ಇವುಗಳ ಗೂಡು ವಠಾರಗಳ ತರಹ ಇರುತ್ತವೆ. ಎಲ್ಲ ಹಕ್ಕಿಗಳು ಒಟ್ಟಾಗಿ ಒಂದೇ ಕಡೆ ಗೂಡು ಕಟ್ಟಿ ವಾಸ ಮಾಡುತ್ತವೆ. ಒಂದು ಸಾರಿ ಇವು ಐದರಿಂದ ಏಳು ಮೊಟ್ಟೆಗಳನ್ನು ಇಟ್ಟು ಮರಿ ಮಾಡುತ್ತವೆ. ತಂದೆ ಮತ್ತು ತಾಯಿ ಹಕ್ಕಿ

ಎರಡೂ ಸೇರಿ ಮೊಟ್ಟೆಗಳಿಗೆ ಕಾವುಕೊಟ್ಟು ನೋಡಿಕೊಂಡು, ಮೊಟ್ಟೆಯಿಂದ ಮರಿಗಳು ಹೊರ ಬಂದಾಗ ಅವುಗಳನ್ನು ಆರೈಕೆ ಮಾಡುತ್ತವೆ. ಹೊರ ಬಂದ ಹಕ್ಕಿಗಳು ಹೊಸ ಜಾಗಗಳನ್ನು ಹುಡುಕಿ ಹೋಗುತ್ತವೆ.




IUCN (International Union for Conservation of Nature) ಪ್ರಕಾರ ಇವುಗಳ ಸಂತತಿ ಸ್ಥಿರವಾಗಿದೆ. ಆದರೂ ಕೂಡ ಮಾನವನ ಅತಿಕ್ರಮ, ಅರಣ್ಯ ನಾಶ. ನದಿ ಹತ್ತಿರದ ಜಾಗಗಳ ನಾಶದಿಂದ ವರ್ಷದಿಂದ ವರ್ಷಕ್ಕೆ ಸಂತತಿ ಕ್ಷೀಣಿಸುತ್ತಿರುವುದಂತೂ ಸತ್ಯ. ಪ್ರತಿಯೊಂದು ಜೀವಿ ಕೂಡ ಪ್ರಕೃತಿಯಲ್ಲಿ ಅಮೂಲ್ಯವಾದ ತನ್ನದೇ ಆದ ಕೊಡುಗೆ, ಸಮತೋಲನ ಹಾಗು ಪರಿಸರ ಸಂರಕ್ಷಣೆ ಮಾಡುತ್ತ ಬಂದಿದೆ. ಮನುಷ್ಯನ ಆಸೆಯಿಂದ ಹಾಗು ಅಭಿವೃದ್ಧಿ ನೆಪದಲ್ಲಿ ಆಗಿರುವ ಅತೀ ಹಸ್ತಕ್ಷೇಪದಿಂದ ಇವುಗಳ ವಾಸಸ್ಥಾನ ಹಾಳಾಗುತ್ತ ಬಂದಿದೆ. ಇದೊಂದೇ ಪ್ರಭೇದದ ಜೀವಿಯಲ್ಲದೆ ಇನ್ನೂ ಹಲವಾರು ಜೀವಿಗಳು ಕ್ಷೀಣಿಸುತ್ತಿವೆ.

ನಾವು ಅಂದರೆ ಮನುಷ್ಯ ಕೂಡ ಪ್ರಕೃತಿ ಪರಿಸರದಲ್ಲಿ ಒಂದು ಜೀವಿ. ನಮಗೆ ಹೇಗೆ ಬದುಕುವ ಹಕ್ಕು ಇದೆಯೋ ಎಲ್ಲ ಜೀವಿಗಳಿಗೂ ಅಷ್ಟೇ ಹಕ್ಕಿದೆ. ನಮ್ಮ ಕಡೆಯಿಂದ ಆಗುತ್ತಿರುವ ಪರಿಸರ ಮಾಲಿನ್ಯ ಹಾಗು ಅರಣ್ಯ ನಾಶ ಖಂಡಿತ ನಿಲ್ಲಬೇಕು. ಎಲ್ಲರೂ ಸ್ವಯಂ ಜಾಗೃತರಾಗಿ ಪರಿಸರ ಸಂರಕ್ಷಣೆ ಮಾಡಿ ಇಂಥ ಅನನ್ಯ ಜೀವಿಗಳ ಬದುಕುವಿಕೆಗೆ ದಾರಿ ಮಾಡಿಕೊಡಬೇಕು.

ನಾವು ಬದುಕೋಣ ಬೇರೆ ಜೀವಿಗಳನ್ನು ಬದುಕಲು ಬಿಡೋಣ...

ಇಂತಹ ಒಂದು ಸಂರಕ್ಷಿತ ವಲಯದಲ್ಲಿ ಅಂದರೆ ನಮ್ಮ ಕರ್ನಾಟಕದ ಶ್ರೀರಂಗಪಟ್ಟಣದ ಸಮೀಪ ಕಾವೇರಿ ನದಿ ದಡದಲ್ಲಿ ಇವುಗಳ ಆಟೋಟ ನೋಡಲು ಕಾಣಸಿಗುತ್ತವೆ.

**ಲೇಖನ: ಗುರುಪ್ರಸಾದ್ ಕೆ. ಆರ್.**

**ಬೆಂಗಳೂರು ಜಿಲ್ಲೆ**



© Wikimedia commons

## ಇರುವೆ ಹೆಸರೇ 'ಕ್ರೇಜಿ ಇರುವೆ'

ಅದು ಹೇಗೆ ನನ್ನ ತಲೆಯಲ್ಲಿ ಇಂಥ ವಿಚಿತ್ರ ಪ್ರಯೋಗಗಳು ಮೂಡುತ್ತವೆಯೋ ಗೊತ್ತಿಲ್ಲ. 5 ವರ್ಷದ ಮಗನಿಗೆ 'ಇ 'ಸ್ವರವನ್ನು ಕಲಿಸಲು ಸಂಕಲ್ಪ ಮಾಡಿದ್ದೆ. ಇ - ಇರುವೆ ಎಂದು ಹಾಗು A - Ant ಅಂತಲೂ ಅವನಿಗೆ ತಿಳಿಸಲು ಒಂದು ಚಟುವಟಿಕೆ ಮಾಡೋಣ ಎಂದುಕೊಂಡೆ. ಅವನು ಖುಷಿಯಿಂದ ಅದಕ್ಕೆ ಏನೇನು ಬೇಕು ಎಂದು ಕೇಳಿ ಕೇಳಿ ಎಲ್ಲವನ್ನೂ ಮನೆಯ ಮುಂದಿನ ಹೂದೋಟದಲ್ಲಿ ಒಟ್ಟುಗೂಡಿಸಿದ್ದ. ನಾನಂದುಕೊಂಡ ಹಾಗೆ ಒಂದು ಶುಭ್ರ ಬಿಳಿ ಹಾಳೆಯ ಮೇಲೆ ಜೇನುತುಪ್ಪದಿಂದ ದೊಡ್ಡದಾದ ದಪ್ಪಕ್ಷರದಲ್ಲಿ 'ಇರುವೆ 'ಎಂದೂ 'Ant' ಎಂದೂ ಬರೆದು ಹೂದೋಟದ ಮಧ್ಯಭಾಗದಲ್ಲಿ ಇಟ್ಟೆ. ಮಗನಿಗೆ ಗಮನವಿಟ್ಟು ನೋಡು ಎಂದು ಇಬ್ಬರೂ ಅಲ್ಲಿಯೇ ನಿಂತೆವು. ಕೆಲ ಕ್ಷಣಗಳಲ್ಲಿ ಒಂದೊಂದಾಗಿ ಇರುವೆಗಳು ಬರತೊಡಗಿದವು. ಅವು ತಮ್ಮ ಕುಟುಂಬಕ್ಕೂ ಸಂದೇಶ ರವಾನಿಸಿ ದೊಡ್ಡ ಸಾಲು ಸೃಷ್ಟಿಯಾಯಿತು. ಇಲ್ಲಿಯವರೆಗೆ ಚಿಕ್ಕ ಕೆಂಪಿರುವೆಗಳಿದ್ದು, ಈಗ ಕ್ರೇಜಿ ಇರುವೆಗಳು ಕೂಡ ಅವತರಿಸಿದವು. ಅವುಗಳ ಪಾರದರ್ಶಕ ಹೊಟ್ಟೆ ಉಬ್ಬಿ ಹೋಯಿತು. ಅದನ್ನು ನೋಡಿ ಮಗ 'ಈಗ ನೋಡು! ಇವುಗಳಿಗೆ ತಿಂದು ತಿಂದು

ಓಡುವುದಕ್ಕೂ ಬರುವುದಿಲ್ಲ' ಎಂದು ಏನೇನೋ ಕಲ್ಪಿಸಿಕೊಂಡು ಕೇಕೆ ಹಾಕಿ ನಗುತ್ತಿದ್ದ. 'ಇರುವೆ'ಗೆ ಇರುವೆಗಳು ಮುತ್ತಿಗೆ ಹಾಕಿದ್ದರಿಂದ, ಬಿಳಿ ಹಾಳೆ ಕೂಡ ಈಗ ಆಕರ್ಷಕವಾಗಿ ಕಾಣುತ್ತಿತ್ತು. ಇಷ್ಟೇ ಆಗಿದ್ದರೆ ನಮ್ಮ ಚಟುವಟಿಕೆ ಬಹುಶಃ ಶಾಂತಿಯುತವಾಗಿ ಮುಗಿಯುತ್ತಿತ್ತೇನೋ! ಆದರೆ ಎರಡು ಬೇರೆ ಬೇರೆ ಬಗೆಯ ಇರುವೆ ಗುಂಪುಗಳ ನಡುವೆ ಯುದ್ಧ ಪ್ರಾರಂಭವಾಯಿತು. ಚಿಕ್ಕ ಕೆಂಪಿರುವೆಗಳು ಕ್ರೇಜಿ ಇರುವೆಗಳ ಮೇಲೆ ಆಕ್ರಮಣಕಾರಿಯಾಗಿ ದಾಳಿ ಮಾಡಿದವು ಆದರೆ ಕ್ರೇಜಿ ಇರುವೆಗಳ ಭಯಂಕರ ಪ್ರಮಾಣದ ಸಂತತಿಯ ಮುಂದೆ ಚಿಕ್ಕ ಕೆಂಪಿರುವೆಗಳು ಸೋಲನ್ನೊಪ್ಪಲೇಬೇಕಾಯಿತು! ಇವುಗಳಿಗೆ ಕ್ರೇಜಿ ಎಂಬ ಹೆಸರು ಇಟ್ಟಿದ್ದಕ್ಕೆ ಸಾರ್ಥಕಗೊಳಿಸಿದವು ಎಂದೆನಿಸಿತು.



© ಅನುಪಮಾ ಕೆ ಬೆಣಚಿನಮರ್ಡಿ



© ಅನುಪಮಾ ಕೆ ಬೆಣಚಿನಮರ್ಡಿ

ಅಂದ ಹಾಗೆ ಈ ಇರುವೆಗೆ crazy ಹೆಸರು ಬಂದಿರುವುದು ಇದರ ವರ್ತನೆಯಿಂದ! ಸ್ವಲ್ಪ ಛೇಡಿಸಿದರೂ ಕೂಡಲೇ ಪ್ರತಿಕ್ರಿಯೆ ಬರುತ್ತದೆ! ಅತ್ತಿಂದಿತ್ತ ಓಡಾಡುವುದು, ನೆಗೆಯುವುದು. ಇದರ ವೈಜ್ಞಾನಿಕ ಹೆಸರು Anoplolepis gracilipes. ನೋಡಲು ಕೆಂಪು ಅಥವಾ ಕಂದು ಬಣ್ಣದ ಇರುವೆ. ಹೊಟ್ಟೆಯ ಭಾಗ ಗಾಢ ಕಂದು ಬಣ್ಣ ಆಗಿದ್ದು, ಅದರ ಮೇಲೆ ಅಡ್ಡ ಗೆರೆಗಳಿರುತ್ತವೆ. ದೇಹಕ್ಕೆ ಹೋಲಿಸಿದರೆ ಉದ್ದವಾಗಿರುವ 6 ಕಾಲುಗಳು. 1 ಇಂಚು ಉದ್ದವಿರುವ ಇರುವೆ ಕಂಡಲ್ಲಿ ಅದು ನಿಸ್ಸಂದೇಹವಾಗಿ ಕ್ರಜಿ ಇರುವೆನೇ. ಇವು ಹೆಚ್ಚಾಗಿ ತಂಪು ಅಥವಾ ಒಣ ಪ್ರದೇಶದಲ್ಲಿ ಕಂಡು ಬರುತ್ತವೆ. ಗೋಡೆಯ ಸಂದು, ಗಿಡದ ಬುಡ, ಹೂಕುಂಡ, ಕಸದ ತೊಟ್ಟಿಗಳಲ್ಲಿ ಇವುಗಳ ಗೂಡು ಕಾಣಸಿಗುತ್ತದೆ.

ಇದು ಮಿಶ್ರಾಹಾರಿ ಜೀವಿಯಾಗಿದೆ. ತಮ್ಮ ಗೂಡು ಬಿಟ್ಟು ತುಂಬಾ ದೂರ ಆಹಾರ ಅರಸುವುದರಲ್ಲಿ ಇವು ಪ್ರಸಿದ್ಧ. ಮಾಂಸಾಹಾರದಲ್ಲಿ ಚಿಕ್ಕ ಕೀಟಗಳು, ಜಿರಳೆ, ಹಲ್ಲಿ ಇತ್ಯಾದಿಗಳನ್ನು ಸೇವಿಸುತ್ತವೆ. ಸಸ್ಯಾಹಾರದಲ್ಲಿ ಕೆಲವು ಬೀಜಗಳು, ಅಡುಗೆ ಮನೆಯಲ್ಲಿ ಸಿಗುವ ಎಲ್ಲಾ ಬಗೆಯ ತಿಂಡಿ ತಿನಿಸುಗಳನ್ನು ಸೇವಿಸುತ್ತವೆ. ಮುಖ್ಯವಾಗಿ ಇದು ಸಿಹಿತಿಂಡಿ ಪ್ರಿಯ! ಜೇನು, ಸಕ್ಕರೆಯಿಂದ ಮಾಡಿದ ಪದಾರ್ಥಗಳು, ಸಿಹಿಯಾದ ಹಣ್ಣುಗಳೆಂದರೆ ಬಲು ಇಷ್ಟ ಪಡುತ್ತದೆ. ಒಮ್ಮೆ ಸಪೋಟ ಹಣ್ಣುಗಳನ್ನು ತಂದು ಸ್ವಲ್ಪ ಹಣ್ಣಾಗಲಿ ಎಂದು

ಬುಟ್ಟಿಯಲ್ಲಿ ಇಟ್ಟಿದ್ದೆವು. ಮರುದಿನ ಬೆಳಿಗ್ಗೆ ನೋಡಿದರೆ ಹಣ್ಣಿನಲ್ಲಿ ದೊಡ್ಡ ರಂಧ್ರ! ತೆಗೆದು ನೋಡಿದರೆ ಒಳಗೆಲ್ಲಾ ರಸ ಹೀರುತ್ತ ಕುಳಿತಿರುವ ಇರುವೆಗಳು! ಮಾಮೂಲಾಗಿ ಒಂದು ಚೂರು ಅವುಗಳಿಗೆ ತೊಂದರೆ ಕೊಟ್ಟರೆ ಅತಿಯಾಗಿ ಓಡಾಡುವ ಇರುವೆಗಳು, ಸಿಹಿ ಹೀರುವಾಗ ತದ್ವಿರುದ್ಧವಾಗಿ ಪ್ರತಿಕ್ರಿಯಿಸುತ್ತವೆ. ಅವುಗಳನ್ನು ಸಿಹಿ ಪದಾರ್ಥಗಳಿಂದ ಕಿತ್ತು ಬೇರ್ಪಡಿಸಬೇಕು! ಇನ್ನೊಂದು ಅಚ್ಚರಿಯ ಸಂಗತಿಯೆಂದರೆ ಈ ಸಿಹಿಯನ್ನು ಹೊಟ್ಟೆಯಲ್ಲಿ ಶೇಖರಿಸಿಕೊಂಡಿದ್ದು; ಬೇರೆ ಇರುವೆಗಳಿಗೆ ಅವಶ್ಯವೆನಿಸಿದಾಗ ಬಾಯಿಯ ಮುಖಾಂತರ ಹಂಚುತ್ತವೆ. ಒಂದು ಸಲ ಮಗನ ಹುಟ್ಟು ಹಬ್ಬಕ್ಕೆಂದು ಮಾಡಿದ್ದ ಒಂದು ಗುಲಾಬ್ ಜಾಮೂನ್ ಅನ್ನು ಬಟ್ಟಲೊಳಗೆ ಹಾಕಿ ಕ್ರೇಜಿ ಇರುವೆಗಳಿಗೆ ನೀಡಿದಾಗ ಅವು ಹೊಟ್ಟೆ ಬಿರಿಯುವಷ್ಟು ರಸವನ್ನು ಹಿರಿದರೂ ಜಾಮೂನನ್ನು ಬಿಡಲು ಸಿದ್ಧವಿರಲಿಲ್ಲ. ಪ್ರಯೋಗಕ್ಕೆಂದು ಅವುಗಳನ್ನು ಛೇಡಿಸಿದರೆ ಅವುಗಳಿಗೆ ನಡೆಯಲು ಸಹ ಕಷ್ಟವಾಗಿತ್ತು! ನೇರವಾಗಿ ನಡೆಯುವುದಂತೂ ಅವುಗಳಿಗೆ ದೂರದ ಮಾತಾಗಿತ್ತು.



© ಅನುಪಮಾ ಕೆ ಬೆಣಚಿನಮರ್ಡಿ

ಈ ಇರುವೆಗಳ ದೊಡ್ಡ ಗುಣವೆಂದರೆ, ಇವು ಕುಟುಕುವುದಿಲ್ಲ ಹಾಗು ಕಚ್ಚುವ ಪ್ರಮಾಣವೂ ಕಡಿಮೆ. ಅದಕ್ಕೆ ಏನೊ ನನ್ನ ಮಗ ಚಿಕ್ಕವನಿದ್ದಾಗ, “ಇರಿ ಇರಿ” (ಇರುವೆ ಅಂತ ಪೂರ್ತಿಯಾಗಿ ಅನ್ನಲು ಬರ್ತಿರಲಿಲ್ಲ) ಎಂದು ಕೂಗುತ್ತಾ ಅವುಗಳನ್ನು ತಗೊಂಡು ನಿರ್ಭಯವಾಗಿ ಬಾಯಲ್ಲಿ ಹಾಕಿಕೊಳ್ಳುತ್ತಿದ್ದ. ಇವುಗಳ ಅತಿಯಾದ ಸಂಖ್ಯೆಯೇ ಇವುಗಳ ಅಸ್ತ್ರ. ಎಲ್ಲೆಂದರಲ್ಲಿ ವೇಗವಾಗಿ ಓಡಾಡುವ ಇರುವೆಗಳನ್ನು ನೋಡಿದರೆ ಎಂಥವರಿಗಾದರೂ ಹುಚ್ಚು ಹಿಡಿಯುತ್ತದೆ.

ಅತಿಯಾದ ಸಂತಾನೋತ್ಪತ್ತಿಯ ಕಾರಣ ಇದು ಬೇರೆ ಪ್ರಭೇದದ ಇರುವೆಗಳ ಸಮೂಹವನ್ನು ಕೂಡ ಸ್ಥಳಾಂತರಿಸುತ್ತದೆ. ಸಾಮಾನ್ಯವಾಗಿ ಒಂದು ಗೂಡಿನಲ್ಲಿ ಒಂದಕ್ಕಿಂತ ಹೆಚ್ಚು ರಾಣಿ ಇರುವೆಗಳಿದ್ದು, ಗೂಡಿನ ಸಂಖ್ಯೆ ಕಡಿಮೆ ಇರುತ್ತದೆ. ಆದರೆ ಇವು ಚಿಕ್ಕ ಚಿಕ್ಕ ಸಮೂಹಗಳ ನಡುವೆ ಸಂಪರ್ಕ ಇಟ್ಟುಕೊಂಡು ದೊಡ್ಡ ಸಮೂಹವಾಗಿ (super colony) ಮಾರ್ಪಡುತ್ತವೆ. ಅಂದ ಹಾಗೆ ನಮ್ಮ ಮನೆಯಲ್ಲಿ ಇರೋದು ದೊಡ್ಡ ಸಮೂಹ (super colony) ಅಲ್ಲ. ಬೇಸಿನ್ ಕೆಳಗಡೆ ಇರುವ ಒಂದು ಸಾಮಾನ್ಯ ಇರುವೆ ಗೂಡು. ಇವು ಈಗ ನಮ್ಮ ಕುಟುಂಬ ಸದಸ್ಯರಾಗಿವೆ. ಈಗಲೂ ಕೂಡ ನನ್ನ ಮಗನಿಗೆ ಊಟ ಮಾಡಿಸಬೇಕಾದರೆ ಇವುಗಳ ಪಾಲು ಮಹತ್ವದ್ದು. ಅದರ ಕಣ್ಣು ನೋಡು ಎನ್ನುತ್ತಲೊ ಅಥವಾ ಅದು ಕೊಂಡೊಯ್ಯುವ ಆಹಾರ ಏನು ಎನ್ನುತ್ತ ಒಂದೊಂದು ತುತ್ತು ತಿನ್ನಿಸಲಾಗುತ್ತದೆ.


© Wikidata

ಲೇಖನ: **ಅನುಪಮಾ ಕೆ. ಬೆಣಚಿನಮರ್ಡಿ**
**ಬೆಂಗಳೂರು ಜಿಲ್ಲೆ**




## ಅರೆಮಾರಿಯ ಅನುಭವಗಳು –೦೩

ಮಲೆಯ ಮಾರುತದ ರಭಸಕ್ಕೆ ಬೆನ್ನುಕೊಟ್ಟು ಕಾಲ್ಕಿತ್ತು ಒಡುವ ಮುಂಗಾರಿನ ಮೋಡಗಳು ಪಶ್ಚಿಮ ಘಟ್ಟದ ತಪ್ಪಲಿನ ಸೆಳೆತಕ್ಕೆ ಎಡವಿಬಿದ್ದು, ಬಿಸಿಗಾಳಿಯನು ಒಡಲೊಳಗೆ ಬಸಿದುಕೊಳ್ಳುತ್ತಾ, ಸಡಲಿಸಿ ಸುರಿಸುವಾಗ ಹೆಪ್ಪುಗಟ್ಟಿದ ಕಪ್ಪು ಮೋಡ, ಹಸಿರ ಸಂಪತ್ತಿಗೆ ಚೊಚ್ಚಲ ಜಳಕ ಮಾಡಿಸಲು ಶುರುವಿಡುತ್ತದೆ! ಆಹಾ, ಅದೆಷ್ಟು ಹಸಿ ಹನಿಗಳ ಮೊನಚು ಮೊಳೆಯ ಸಿಟ್ಟು, ಒಟ್ಟಿಗೆ ನೆತ್ತಿಗೇರಿ ಪಶ್ಚಿಮ ಘಟ್ಟದ ತಪ್ಪಲಿನ ತಲೆಗೆ ಬಾರಿಸುತ್ತಿದೆ. ಎಷ್ಟು ಚೆಂದದ ಹಸಿ ಸಂಕಟ! ಬಿದ್ದ ಹನಿಗಳ ಬಾಚಿ ತಬ್ಬುವ ಕಲ್ಲರಮನೆ ಘಾಟ್ ನ ಕಾಡುಗಳು ಅಮಲೇರಿಸುವ ಘಮಲೊಂದು ಸಣ್ಣಗೆ ಗಾಳಿಯೊಟ್ಟಿಗೆ ಬೆರೆಸಿ ಕೊಡುತ್ತದೆ. ತಣ್ಣಗೆ ಮೈಕೊಡವಿ ಮಳೆಯ ಹಸಿಯನ್ನೆಲ್ಲಾ ಇಂಗಿಸಿಕೊಳ್ಳುವ ಹಸಿಬಿಸಿ ನೆಲ ಬಸಿದು ಕೊಡುವ ಕಂಪು ಎಂಥವರನ್ನೂ ಸಹ ಒಂದರೆಕ್ಷಣ ಮೈಮರೆತು ಕಣ್ಮುಚ್ಚಿ ಅನುಭವಿಸಲು ತೆಕ್ಕೆಗೆಳೆದು ಕೊಳ್ಳುತ್ತದೆ!




ಸುಖಾಸುಮ್ಮನೆ, ಬರಿಗಾಲ ಹೆಜ್ಜೆಗಳನು ಮುಂಗಾರು ಮಳೆಗಾಲದ ಕೆಸರಿಗೆ ಅಂಟಿಸಿ ಕಿತ್ತಿಡುವಾಗ ನಖಶಿಖಾಂತ ನಡುಗುವಷ್ಟು ಹಸಿ ತೇವದ ಸುಖ ಈ ಮೈ ಹೊಕ್ಕು, ಜೀವವೀಣೆಯ ಪ್ರತಿ ತಂತಿಯನು ತಟ್ಟಿ ಬಾರಿಸುತ್ತದೆ! ಈ ಮೈ ಮಳೆಗೆ ಚಾಚುತ್ತಲೆ, ಬೆಚ್ಚಗಿನ ಗೂಡೊಂದು ಬಯಸುತ್ತಾ ಏದುಸಿರ ಬಿಸಿ ಗಾಳಿ ಹೊರ ಚೆಲ್ಲಿ ಬರಿಗಾಲ ಹೆಜ್ಜೆ ಬರೆಯುತ್ತದೆ! ಶರಂಪರ ಸುರಿಯುವ ಮಳೆಯ ಹೊಡೆತಕ್ಕೆ ದಖ್ಖನ್ನಿನ ಅನಾವೃಷ್ಟಿಯು ತೊಳೆದು ಪಶ್ಚಿಮ ಘಟ್ಟದ ಜೀವನದಿಗಳು ತುಂಬಿ ಮೈದುಂಬಿಕೊಂಡು ಹರಿಯುತ್ತವೆ!




ಕಾಳಿ ತನ್ನ ರಭಸವನ್ನು ಹೆಚ್ಚಿಸಿದಂತೆಲ್ಲಾ ದಾಂಡೇಲಿ ಕಾಡುಗಳ ಹಸಿರು ಇಮ್ಮಡಿಗೊಳ್ಳುತ್ತದೆ. ಕಾಳಿ, ಕಲ್ಲು ಬಂಡೆಗಳ ಮಧ್ಯೆ ತೆವಳುವುದಕ್ಕಿಂತ ಭೋರ್ಗರೆದು ಸಾಗುವ ರಭಸಕ್ಕೆ ರಕ್ಕಸ ಹೊಡೆತದ ಸುಖ ಪ್ರತಿ ಕರಿಕಲ್ಲಿಗೆ ತಾಕಿ ಬಿಳಿನೊರೆ ಸೃಷ್ಟಿಗೊಳ್ಳುತ್ತದೆ. ಸೂರಬ್ಬಿ ಹಳ್ಳ ಕಲ್ಲರಮನೆ ಘಾಟ್ ನ ಕಾಳಿ ಕಣಿವೆಗಳ ಸಣ್ಣ ಪುಟ್ಟ ದ್ವೀಪಗಳನ್ನು ಸವರಿಕೊಂಡು ಕಾಡಿನ ತೇವಾಂಶದಿಂದ ಬಸಿದು ಬಂದ ನೀರಿನ ಝರಿಗಳನ್ನು ಒಗ್ಗೂಡಿಸಿಕೊಂಡು ಧುಮ್ಮಿಕ್ಕುವ ಸುಖಕ್ಕೆ ಜಲಪಾತಗಳು ಸೃಷ್ಟಿಗೊಳ್ಳುತ್ತವೆ! ಪಶ್ಚಿಮ ಘಟ್ಟದ ಹೆಬ್ಬಾಗಿಲಿಗೆ ತಲೆಮಾರುಗಳಿಂದ ಅಂಟಿಕೊಂಡು ಜೋತು ಬಿದ್ದ ಜನಜೀವನ ಕಾಲಕ್ರಮೇಣ ಹಲವಾರು ಯೋಜನೆಗಳಿಗೆ ಒಗ್ಗಿಕೊಂಡು ಬದುಕಬೇಕಾದ ಅನಿವಾರ್ಯತೆಗೆ ಸಿಕ್ಕು ನಲುಗಿದ್ದೂ ಉಂಟು. ಒಂದು ಜಲಾಶಯದ ಯೋಜನೆ ಅಲ್ಲಿನ ಜನವಸತಿಯನ್ನ ಅವರ ಮೂಲ ನೆಲೆಗಳನ್ನ ಅವರ ಜೀವನ ಸೆಲೆಯ ಬೇರನ್ನು ಒಂದು ಇಡೀ ಪೀಳಿಗೆಗೆ ತಾಕುವಂತೆ ಅಲುಗಾಡಿಸಿದ್ದೂ ಸಹ ಸಹಜ ಸಂಗತಿಯಲ್ಲ! ನಿಲ್ಲದ ಬದುಕು ಮತ್ತೆ ಮತ್ತೆ ಅಲೆಮಾರಿತನಕ್ಕೆ ಜೋತು ಬೀಳುವಂತೆ ಒತ್ತಾಯಿಸಿಬಿಡುವುದು ಸಹ ಇಂತಹ ಇಕ್ಕಟ್ಟಿನ ಸ್ಥಿತಿಯಲ್ಲಿಯೆ. ಮತ್ತೆ ಮಲೆಯ ಮೂಲೆಯ ಮತ್ತೊಂದು ತಿರುವಿನ ಹಿನ್ನೀರೊ ಮುನ್ನೀರೊ ಸಣ್ಣ ಜಲದ ಜಾಲ ಸಿಕ್ಕರೆ ಸಾಕು ಮತ್ತೊಂದು ಠಿಕಾಣಿ ಹೂಡಿ ಬದುಕಿನ ಬುತ್ತಿ ಬಿಚ್ಚಿ ಸವಿಯುವುದೆ ಸುಖಸಂಕಟ!



ನಸುಕಿನ ಕಾವಳ ಸಡಿಲುಗೊಂಡು ಸಣ್ಣ ಬೆಳಕಿನ ಚೂರುಗಳು ವಿಲೀನಗೊಳ್ಳುವಾಗ ಇಡೀ ಕಾಡ ಮೊಗ್ಗುಗಳ ಗರ್ಭದೊಳಗೆ ಒಂದು ತುರ್ತಿಗೆ ಕಾದ ಕಾತುರದ ಸೆಳೆತ ಇದೆ. ಮಾಘ ಮಾಸಕ್ಕೆ ಉದುರಿ ಬಿದ್ದ ತರಗೆಲೆಗಳ ರಾಶಿಗೆ ಅಂಗಾಲ ಅಂಟಿಸಿ ನಡೆಯುವಾಗ ಮೈಮುರಿದ ಎಲೆಗಳ ಸದ್ದು ಮೌನವನ್ನೆಲ್ಲಾ ಅತಿಕ್ರಮಿಸಿ ಗರ್ಜಿಸುತ್ತವೆ. ಕಾಡು ಹಕ್ಕಿಯ ಕೊರಳೊಳಗಿಂದ ಹೊರಟ ಇಂಚರ ಇಡೀ ಕಾನನವೆ ಪ್ರತಿಧ್ವನಿಸುವಂತೆ ತರಂಗಗಳ ಬಾಚಿ ತಬ್ಬುತ್ತದೆ. ಮೊಗ್ಗರಳಿ ಹೂ ಹದಗೊಳ್ಳುವ ಕ್ರಿಯೆಗೆ ಜೇನು ಝೇಂಕಾರದ ಭ್ರಮರ ನಾದ ನಾರಯಣ ನಾಬಿ ಕಮಲದುತ್ಪತ್ತಿ ಬ್ರಹ್ಮಲೋಕವೆ ಆ-ವರಿಸಿದಂತಿದೆ! ಬೆಳಕೂ ಅಲ್ಲದ ಬೆಳಗೂ ಅಲ್ಲದ ಅತಿ ತಮಿಸ್ರವೂ ಎನ್ನಲಾಗದ ಸೂಕ್ಷ್ಮಾತಿಸೂಕ್ಷ್ಮ ಸುಂದರ ಗಳಿಗೆಯೊಂದು ಕತ್ತಲೆ ತನ್ನ ಹೊದಿಕೆ ಮಡಚಿಡುವ ಮುನ್ನ ಬೆಳಕನ್ನು ಬರಮಾಡಿಕೊಳ್ಳಲು ಸುಸಜ್ಜಿತಗೊಳ್ಳುವ ಪರಿಗೆ ಈ ಜಗದ ಬೆಳಗೇ ಬೆರಗುಗೊಳ್ಳುತ್ತದೆ! ಬಸವನ ಹುಳು ತನ್ನ ಶಂಖು ಮೈ ತೆವಳಿಕೊಂಡು ಸಾಗುವ ರಭಸಕ್ಕೆ ಇಡೀ ಯುಗದೊಳಗೆ ಶೇಖರಗೊಂಡ ಮೌನ ಸಾಕ್ಷಿ ಬರೆಯುತ್ತದೆ. ಪ್ರತಿ ನಿತ್ಯವೂ ನೂತನವಾದ ವಿನೂತನವಾದ ನವನವೀನವಾದ ಅಚ್ಚರಿಗಳನು ಈ ಪ್ರಕೃತಿ ನಮಗೆ ಎದುರುಗೊಳಿಸುತ್ತದೆ. ಯಾವುದನ್ನೂ ಅಲ್ಲಗಳೆಯದೆ ಹಾಳುಗೆಡವದೆ ಸುಮ್ಮನೆ ಅನಂತ ಸುಖವನ್ನು ಕಣ್ಮುಚ್ಚಿ ಅನುಭವಿಸಿ ಸಾಗಬೇಕು.








**ಲೇಖನ: ಮೌನೇಶ ಕನಸುಗಾರ**

**ಕಲ್ಬುರ್ಗಿ ಜಿಲ್ಲೆ**





ವಿವಿ ಅಂಕಣ

# ಬಾತುಕೋಳಿಯ ಮಾತು ಕೇಳಿ...

ಎಂದೂ ಕಂಡಿರದ, ಕೇಳಿರದ, ಸವಿಯದ, ತರು-ಲತೆಗಳಿಂದ ಸಿಂಗರಿಸಿಕೊಂಡು ತಲೆಯ ಮೇಲೆ ಮಂಜಿನ ಕಿರೀಟವನ್ನು ಧರಿಸಿದ್ದ ಪರ್ವತ ಶ್ರೇಣಿಗಳು ಕಣ್ಣ ಮುಂದೆ ಇದ್ದವು. ಮೊದಲ ನೋಟದಲ್ಲೇ ಮನಸೋತಾಗಿತ್ತು. ಜೊತೆಗೆ ನಡೆದು ನಡೆದು ಕಾಲುಗಳೂ ಸಹ ಸೋತಿದ್ದವು. ಉತ್ತರಖಂಡ ರಾಜ್ಯದ ಭಾಗಕ್ಕೆ ಪ್ರವಾಸ ಬಂದಿದ್ದ ನಾವು, ಅಂದು ಚಂದ್ರಶಿಲಾ ಪರ್ವತದಲ್ಲಿದ್ದ 'ತುಂಗ್ ನಾಥ್' ಅರ್ಥಾತ್ ಪರ್ವತಗಳ ದೇವನಾದ ಈಶ್ವರನ ಸನ್ನಿಧಾನಕ್ಕೆ ಚಾರಣ ಹೊರಟಿದ್ದೆವು. ಸುತ್ತಲಿನ ಪರ್ವತಗಳ ಸೌಂದರ್ಯ ಸವಿಯುತ್ತಾ ನಡೆಯುವಾಗ ಸ್ವಲ್ಪ ಸುಸ್ತಾಯಿತು. ಏಕೆ ಸುಸ್ತಾಯ್ತು ಎಂದು ಯೋಚಿಸುವಾಗಲೇ ತಿಳಿದದ್ದು ಅಂದಿನ ಉಪಹಾರ ಸೇವಿಸಲೇ ಇಲ್ಲ ಎಂದು. ಹಾಗೆ ಮುಂದೆ ನಡೆದಾಗ ಜನಸಂದಣಿ ಮತ್ತು ಹೆಂಚಿನ ಛಾವಣಿಯ, ಮನೆಗಳ ರೂಪದಲ್ಲಿದ್ದ ಅಂಗಡಿ-ಹೋಟೆಲುಗಳು ಕಂಡವು. ಓಹ್... ಹಾಗಾದರೆ ತಲುಪಬೇಕಿದ್ದ ಜಾಗ ಬಂದಾಯ್ತು ಎಂದುಕೊಂಡು ಒಂದು ಹೋಟೆಲ್ ಗೆ ಹೋಗಿ ತಿನ್ನಲು ಶುರುಮಾಡಿದೆವು. ಬಹುಶಃ ಇಲ್ಲೆ ಎಲ್ಲೊ ದೇವಸ್ಥಾನವಿರಬೇಕು, ಮುಗಿಸಿ ಮುಂದೆ ಹೋಗಬಹುದು ಎಂದುಕೊಂಡೆ. ಆದರೆ ತಿಂಡಿ ಮುಗಿಸಿದ ಮೇಲೆಯೇ ತಿಳಿದದ್ದು, ನಾವು ತಲುಪಬೇಕಿದ್ದ ತುಂಗನಾಥನ ದೇವಸ್ಥಾನಕ್ಕೆ ಹೊರಡುವ ಚಾರಣದ ಹಾದಿಯ ಶುರುವಿನಲ್ಲಿದ್ದೇವೆಂದು. ಆದರೂ ಪರವಾಗಿಲ್ಲ ತಿಂಡಿ ತಿಂದು ಶಕ್ತಿ ಬಂದಿದೆ ಜೊತೆಗೆ ಎಂತೆಂಥಾ ಬೆಟ್ಟಗಳನ್ನೆಲ್ಲಾ ಹತ್ತಿದ್ದೇವೆ ಎಂದುಕೊಂಡು ಚಾರಣ ಶುರುಮಾಡಿದೆವು. ಅದೇಕೋ ಗೊತ್ತಿಲ್ಲ ಆ ಬೆಟ್ಟಗಳಲ್ಲಿ ಸ್ವಲ್ಪ ದೂರ ನಡೆದರೂ ಹೆಚ್ಚು ಸುಸ್ತಾಗುತ್ತದೆ. ಹಿಮಾಲಯ ಪರ್ವತ ಶ್ರೇಣಿಗಳ ಹಾಗೆ ಸಮುದ್ರ ಮಟ್ಟದಿಂದ ಎತ್ತರಕ್ಕಿವೆಯಲ್ಲಾ ಅದಕ್ಕೇ ಇರಬೇಕು ಎಂದುಕೊಳ್ಳುತ್ತಾ ಚಾರಣ ಮುಂದುವರೆಸಲಾಯಿತು.




ಚಾರಣಕ್ಕೆ ಕಲ್ಲಿನ ಹಾದಿಯಿದ್ದು ಅದು ನಮ್ಮ ಕರ್ನಾಟಕದ ಘಟ್ಟದ ರಸ್ತೆಗಳಂತೆ ಅಲ್ಲಲ್ಲೇ ತಿರುಗಿ ತಿರುಗಿ ಹೋಗಿದ್ದವು. ನಾವೇಕೆ ಹೀಗೆ ತಿರುಗಿ ತಿರುಗಿ ಹೋಗಬೇಕು, 'ದೂರ' ಜಾಸ್ತಿ ಇದೆ, ನಾವು 'ಡಿಸ್ಪ್ಲೇಸ್ಮೆಂಟ್'ದಾರಿಯಲ್ಲಿ ನಡೆಯೋಣವೆಂದು, ನಾನು ಮತ್ತು ಪಿಳ್ಳೆ (ಚಡ್ಡಿ ದೋಸ್ತನ ಅಡ್ಡ ಹೆಸರು) ನಿರ್ಧರಿಸಿಕೊಂಡೆವು. ಹಾಗಾಗಿ ದಾರಿ ಇಲ್ಲದಿದ್ದರೂ ಬೆಟ್ಟವನ್ನು ನೇರಕ್ಕೆ ಹತ್ತಲು ಶುರು ಮಾಡಿದೆವು. ಸ್ವಲ್ಪ ಸಮಯದ ನಂತರ ದಾರಿಯೇ ಕಾಣಲಿಲ್ಲ. ಸ್ವಲ್ಪ ಅನುಮಾನ ಶುರುವಾದರೂ ಮುಂದೆ ನಡೆದ ಮೇಲೆ ದಾರಿ ಕಂಡಿತು. ಓಹ್ ಹಾಗಾದರೆ ನಾವು ಸರಿಯಾದ ದಾರಿಯಲ್ಲೇ ಇದ್ದೇವೆ ಎಂದುಕೊಂಡು ಮುಂದುವರೆದೆವು. ಇರುವ ದಾರಿ ಬಿಟ್ಟು ಹೀಗೆ ನಾವೇ ಅಂದಾಜಿನ ದಾರಿ ಮಾಡಿಕೊಂಡು ಹೋಗುವುದರಲ್ಲಿ ಏನೋ ಮಜವಿದೆ. ಈ ನಮ್ಮ ತಲೆಯೊಳಗಿನ ಮಾತು ಜುಪಿಟರ್ (ಅಕ್ಕನ ಅಡ್ಡ ಹೆಸರು) ಗೆ ಕೂಡಾ ಕೇಳಿಸಿದೆ ಎನಿಸುತ್ತದೆ. 'ನಾನೂ ನಿಮ್ ಜೊತೆ ಬರ್ತೀನಿ' ಎಂದಳು. ನಾವೂ ಸಹ ಹೆಚ್ಚು ಯೋಚಿಸಲಿಲ್ಲ, ನಿನಗಾಗುವುದಾದರೆ ಬಾ ಎಂದೆವು. ಸಾಹಸ ಮಾಡಲು ಇಚ್ಛಿಸುವವರಿಗೆ ನಾವ್ಹೇಗೆ ಬೇಡ ಎನ್ನುವುದು!

ಹೀಗೆ ನಮ್ಮ ಸಾಹಸದ ಅಡ್ಡದಾರಿ ಶುರುವಾಯಿತು. ನಮ್ಮದು ಸುಲಭವಾದ ತರ್ಕ, ಹೇಗಿದ್ದರೂ ಬೆಟ್ಟದ ತುದಿಗೆ ತಲುಪಬೇಕು. ಯಾವ ದಾರಿಯಲ್ಲಿ ಹೋದರೇನು? ಎಂದುಕೊಂಡು ಅಲ್ಲಿ ಬೆಳೆದಿದ್ದ ಗಿಡಗಳು, ಅವುಗಳ ಮೇಲಿನ ಮಂಜನ್ನು ನೋಡಿ ಆಸ್ವಾದಿಸುತ್ತಾ ಮುಂದೆ ನಡೆದೆವು. ಸ್ವಲ್ಪ ದೂರದಲ್ಲೇ ಬೆಟ್ಟದ ತುದಿ ತಲುಪುವುದರಲ್ಲಿದ್ದೆವು. ಅರೇ ಇಷ್ಟು ಬೇಗ ಬಂದುಬಿಟ್ಟೆವಾ, ಮೇಲೆ ಹೋಗಿ ಒಟ್ಟಿಗೆ ಸುಧಾರಿಸಿಕೊಳ್ಳೋಣ ಎಂದು ಸ್ವಲ್ಪ ವೇಗ ಹೆಚ್ಚಿಸಿದೆವು. ತಲೆ ಕೆಳಗಿರಿಸಿ ಹತ್ತುತ್ತಿದ್ದ ನಾವು ತುದಿ ಸಿಕ್ಕಮೇಲೆ ತಲೆ ಎತ್ತಿದರೆ... ಇನ್ನೊಂದು ಸಣ್ಣ ಬೆಟ್ಟ ಮುಂದೆ ಗೋಚರಿಸುತ್ತಿದೆ. ಅಯ್ಯೋ ಆದರಾಯಿತು ಇದೊಂದು ಬೆಟ್ಟ ಅಲ್ಲವೇ ಸ್ವಲ್ಪ ಸುಧಾರಿಸಿಕೊಂಡು ಮುಂದೆ ಹೋಗೋಣವೆಂದು ನಿರ್ಧರಿಸಿ ಕುಳಿತೆವು.

ಅಲ್ಲಿಂದ ಕಾಣುತ್ತಿದ್ದ ಪರ್ವತ ಶ್ರೇಣಿಗಳು ನಯನ ಮನೋಹರಕ್ಕೆ ಮೀರಿದ್ದವಾಗಿದ್ದವು. ನಾವು ನಡೆದು ಬಂದ ದಾರಿ ಬಿದ್ದ ಸಣ್ಣ ದಾರದ ಎಳೆಯಂತೆ ಕಾಣುತ್ತಿತ್ತು. ಸರಿ ಗುರಿ ತಲುಪುವ ಸಮಯ ಎಂದುಕೊಂಡು ಮುಂದೆ ಹೆಜ್ಜೆ ಹಾಕಿದೆವು. ಒಂದೊಂದು ಹೆಜ್ಜೆ ಇಟ್ಟಂತ್ತೆಲ್ಲಾ ಏನೋ ಕಾಣದ ಆಯಾಸ ಆವರಿಸುತ್ತಿತ್ತು. ಆದರೂ ಪರವಾಗಿಲ್ಲ ಹತ್ತಿಬಿಡೋಣ ಎಂದು ದೃಢಸಂಕಲ್ಪದಿಂದ ಒಂದಾದ ಮೇಲೆ ಒಂದು ಹೆಜ್ಜೆಗಳನ್ನಿಡುತ್ತಾ ಮುನ್ನಡೆದೆವು. ಇನ್ನೇನು ಆ ಬೆಟ್ಟದ ತುದಿ ನಮ್ಮ ಕೈಗೆಟುಕುತ್ತಿದೆ ಎನ್ನುವಷ್ಟರಲ್ಲಿ ಬೆಳಿಗ್ಗೆ ತಿಂದ ತಿಂಡಿ ಏಕೋ ಹೊಟ್ಟೆಯ ಪಚನಕ್ರಿಯೆಯಲ್ಲಿ ಸರಿಯಾಗಿ ಭಾಗಿಯಾಗದ ಮುನ್ಸೂಚನೆ ನೀಡಿತ್ತು. ಆ ಆಯಾಸದ ಚಾರಣದಲ್ಲಿ ಎರಡು ಮನಸ್ಸಿಗೆ ಜಾಗವಿರಲಿಲ್ಲ. ಆದ್ದರಿಂದ ಅಲ್ಲೇ ದೂರದಲ್ಲಿ ಮುಖ್ಯ ಕೆಲಸ ಮುಗಿಸಿ ಚಾರಣ ಮುಂದುವರೆಸಲಾಯಿತು. ಅಷ್ಟರಲ್ಲಿ ಎಷ್ಟು ಸುಸ್ತಾಗಿತ್ತೆಂದರೆ ನಮ್ಮ ಕಾಲನ್ನು ನಾವೇ ಕೈಯಾರೆ ಎತ್ತಿ ಇಡಬೇಕಿತ್ತು. ಆಗಲೂ ಸಹ ಬಿಡದೆ ಆ ತುದಿಯನ್ನೂ ತಲುಪಿ ತಲೆ ಎತ್ತಲು... ಇನ್ನೊಂದು ತುದಿ ಮಾಯಾಲೋಕದಿಂದ ನಮಗಾಗೆ ಬಂದು ಬಿದ್ದಿತ್ತು. ಬಹುಶಃ ನಾವೂ ಎಲ್ಲರೂ ಇದ್ದ ದಾರಿಯಲ್ಲೇ ಬರಬೇಕಿತ್ತೇನೋ ಎಂದು ಇನ್ನೇನು ಅಂದುಕೊಳ್ಳುವಷ್ಟರಲ್ಲಿ ನಮ್ಮ ಸಹ ಚಾರಣಿಗರ ಧ್ವನಿ ಇಲ್ಲೇ ಎಲ್ಲೋ ಕೇಳಿಸಿತು. ಹಾಗಾದರೆ ಪರವಾಗಿಲ್ಲ ಸರಿ ದಾರಿಯಲ್ಲಿದ್ದೇವೆ ಎಂದುಕೊಂಡೆವು. ಇದೊಂದೇ ತುದಿ ಹತ್ತಿದರೆ ಗುರಿ ಮುಟ್ಟುತ್ತೇವೆಂದು, ಮೂರನೇ ತುದಿ ತಲುಪುವ ಆತುರದಲ್ಲಿ ಮುನ್ನಡೆದೆವು. ಕೇವಲ ಕೆಲವೇ ಮೀಟರುಗಳ ಎತ್ತರದಲ್ಲಿದ್ದ ತುದಿಯನ್ನು ಅರ್ಧ ಘಂಟೆ ಹತ್ತಿ ಹತ್ತಿರ ಬಂದಿದ್ದೆವು. ತಲೆ ಎತ್ತಲು ಈ ಬಾರಿ ಇನ್ನೊಂದು ತುದಿಯ ಬದಲಿಗೆ ಯಾರೋ ಈ ಮೊದಲೇ ಬಂದು ನೆಟ್ಟಿದ್ದ ವಿಜಯ ಪತಾಕೆ ಕಣ್ಣಿಗೆ ಬಿತ್ತು. ನಮ್ಮ ಖುಷಿಗೆ ಪಾರವೇ ಇರಲಿಲ್ಲ. ನಾವೂ ಪತಾಕೆಯನ್ನು ಸ್ಪರ್ಶಿಸಿ ನಮ್ಮ ವಿಜಯೋತ್ಸವವನ್ನು ಮನಸ್ಸಿನಲ್ಲೇ ಆಚರಿಕೊಳ್ಳುತ್ತಿದ್ದೆವು. ನಮ್ಮ ಇತರ ಸ್ನೇಹಿತರ ಸುಳಿವೂ ಕಾಣಲಿಲ್ಲ. ನಾವೇ ಮೊದಲು ತಲುಪಿದ್ದೇವೆಂಬ ಒಣಜಂಭ ಮೈಯಲ್ಲಿ ಓಡಾಡುತ್ತಿರುವಾಗ ದೂರದಿಂದ ಯಾರೋ ಕಿರುಚುವ ಧ್ವನಿ ಮೆಲ್ಲಗೆ ಕೇಳಿಸಿದಂತಾಗಿ ಆ ದಿಕ್ಕಿಗೆ ತಿರುಗಿದೆವು. ನೋಡಿದರೆ ಯಾರೋ ದೂರದಿಂದ ನಮ್ಮ ಕಡೆಗೆ ಕೈಯಾಡಿಸಿ ಏನೋ ಹೇಳುವ ಹಾಗೆ ಕಂಡಿತು. ಎದುರಿಗಿದ್ದ ಪಾತಾಳ ದಾಟಿ ಇದ್ದ ಆ ಬೆಟ್ಟದಿಂದ ನಮ್ಮನ್ಯಾರು ಮಾತನಾಡಿಸುತ್ತಾರೆ ಎಂದು ನಮ್ಮ ಹೆಗಿಲಿಗೇರಿಸಿದ್ದ ಬೈನಾಕುಲರಿನಿಂದ ನೋಡುತ್ತೇವೆ. ಅವರು ನಮ್ಮ ಸ್ನೇಹಿತರೇ! ಅಷ್ಟರಲ್ಲಿ ನಾವು ದಾರಿ ತಪ್ಪಿದ್ದೇವೆಂಬ ಅರಿವು ನಮ್ಮ ನಮ್ಮಲ್ಲೇ ಯಾರೂ ಹೇಳದಂತೆ ಅರಿವಾಗಿಬಿಟ್ಟಿತ್ತು. ಅವರಿದ್ದ ಆ ದೇವಸ್ಥಾನದ ಬೆಟ್ಟವನ್ನು ಹತ್ತಲು ಈ ಬೆಟ್ಟ ಇಳಿದು


© ಜೈಕುಮಾರ್ ಆರ್.

ನಡೆದು ಇನ್ನೊಂದನ್ನು ಹತ್ತಬೇಕಿತ್ತು ಎಂದು ಅರಿವಾಗುತ್ತಲೇ, ತೆರೆದ ಕಣ್ಣು ತೆರೆದ ಹಾಗೆ, ತೆರೆದ ಬಾಯಿ ತೆರೆದ ಹಾಗೆ ಇದ್ದದ್ದು ನೆನಪಾಗಿ ವಾಸ್ತವಕ್ಕೆ ಬಂದೆ. ಹೇಗಿದ್ದರೂ ದಾರಿ ತಪ್ಪಿಯಾಯ್ತು, ಮುಂದಿನ ದಾರಿಯೂ ತಿಳಿದಿದೆ. ಇಲ್ಲೇ ಸ್ವಲ್ಪ ಸಮಯ ವಿಶ್ರಮಿಸಿ ಹೋಗೋಣವೆಂದು ನಿರ್ಧರಿಸಿ ಅಲ್ಲೆ ಸ್ವಲ್ಪ ಕಾಲ ಕುಳಿತೆವು. ಸುಧಾರಿಸಿಕೊಂಡು ನಮ್ಮ ದಾರಿ ತಪ್ಪಿದ ಬೆಟ್ಟ ಇಳಿದು, ದೇವಸ್ಥಾನದ ಬೆಟ್ಟ ಹತ್ತಿ ಮಹದೇವನ ದರ್ಶನ ಮಾಡಿ ಕುಳಿತುಕೊಳ್ಳೋಣವೆಂದು ಬಂದರೆ, ಬನ್ನಿ ಚಂದ್ರಶೀಲಾ ಪರ್ವತ ಹತ್ತೋಣ ಎನ್ನುವುದೇ? ಅರೇ... ಮತ್ತೆ ಈ ದೇವಸ್ಥಾನ ಏನು? ಎಂದರೆ, ಇದು ಬರೀ ದೇವಸ್ಥಾನ, ಪರ್ವತ ಇನ್ನೂ ಸ್ವಲ್ಪ ಹತ್ತಬೇಕೆಂದರು. ಅಲ್ಲಿಗೇ ಹಣ್ಣುಗಾಯಿ ನೀರುಗಾಯಿ ಆಗಿದ್ದ ನಮಗೆ ನಮ್ಮ ದೇಹವನ್ನು ಎಳೆದುಕೊಂಡು ಹೋಗುವುದು ಹೇಗೆ ಎನ್ನಿಸಿತು. ಆದರೂ ಬಿಡದೆ ಹತ್ತಿಬಿಟ್ಟೆವು, ಹತ್ತುವ ದಾರಿಯಲ್ಲಿ ಸಿಕ್ಕ ಮಂಜುಗಡ್ಡೆಯನ್ನು ಮುರಿದುಕೊಂಡು ಹೋಗಿ ಪರ್ವತದ ಮೇಲೆ ನಾವೇ ತಂದಿದ್ದ ವಿಶೇಷ ಮೇಣ ಬಳಸಿ ಸಣ್ಣ ಪಾತ್ರೆಯಲ್ಲಿ ತಂದಿದ್ದ ಮಂಜುಗಡ್ಡೆಯನ್ನು ಕರಗಿಸಿ ಮಾಡಿದ ಚಹಾ... ಸುತ್ತಲೂ ಕಾಣುತ್ತಿದ್ದ ಹಿಮಾಲಯ ಪರ್ವತದ ಸಾಲು ಬಣ್ಣಿಸಲು ಅಸಾಧ್ಯ, ನೀವೇ ಅನುಭವಿಸಬೇಕಷ್ಟೇ...!

ಅಂದು ನಾವು ತಪ್ಪಿದ ದಾರಿ ನಮ್ಮನ್ನು ಹೊಸ ಪ್ರಪಂಚಕ್ಕೇ ಕರೆದುಕೊಂಡು ಹೋಗಿತ್ತು. ಆ ಅನುಭವವನ್ನು ಈಗಲೂ ನೆನೆಯುತ್ತೇವೆ. ಆದರೆ ಹಿರಿಯರು ತೋರಿದ ದಾರಿಯಲ್ಲಿ ನಡೆಯದಿದ್ದರೆ ಕಷ್ಟಕ್ಕೂ ಈಡಾಗಬೇಕಾಗುತ್ತದೆ. ಬಾತುಕೋಳಿಯ ಮರಿಗಳ ಹಾಗೆ. ಅಮ್ಮ ಬಾತುಕೋಳಿಯ ಜಾಡು ಹಿಡಿದು ಶಿಸ್ತಿನ ಸಿಪಾಯಿಯಂತೆ ಸಾಲಾಗಿ ಮರಿ ಬಾತುಗಳು ಸಾಗುವುದನ್ನು ಎಲ್ಲಾದರೂ ಗಮನಿಸಿರುವಿರಾ? ಈ ಚಿತ್ರದಲ್ಲಿ ಕಾಣುವ ಹಾಗೆ, ಅಮ್ಮ ಬಾತುವಿನ ಹಿಂದೆ ಹೀಗೆ ಸಾಗುವುದರಿಂದ ಮರಿಗಳು ಲೀಲಾಜಾಲವಾಗಿ ಈಜುತ್ತಾ ಶಕ್ತಿಯನ್ನು ಉಳಿಸಬಹುದು ಎನ್ನುತ್ತಿದೆ ಈ ಸಂಶೋಧನೆ. ಹೌದು, ಮರಿಗಳು ಹೀಗೆ ಅಮ್ಮನ ಹಿಂದೆ ಸಾಲಾಗಿ ಹೋಗುವುದರಿಂದ ಈಜಲು ತಾವು ಬಳಸುವ ಶಕ್ತಿಯಲ್ಲಿ ಸ್ವಲ್ಪ ಮಟ್ಟಿಗೆ ಉಳಿಸಬಹುದೆನ್ನುತ್ತಾರೆ ವಿಜ್ಞಾನಿ ಯುವಾನ್. ಈ ಹಿಂದೆಯೇ ಬಾತುಗಳು ಈಜುವಾಗ ಎಷ್ಟು ಶಕ್ತಿಯನ್ನು ಬಳಸುತ್ತವೆ ಎಂಬುದನ್ನು ಲೆಕ್ಕಿಸಲಾಗಿದೆ. ಜೊತೆಗೆ ಮರಿಗಳು ಅಮ್ಮನ ಹಿಂದೆ ಹೀಗೆ ಈಜುವುದರಿಂದ ಶಕ್ತಿಯನ್ನೂ ಉಳಿಸುತ್ತವೆ, ಎನ್ನುವುದನ್ನೂ ಕಂಡುಕೊಂಡಿದ್ದರು. ಆದರೆ ಏಕೆ? ಹೇಗೆ? ಎಂದು ಯಾರಿಗೂ ತಿಳಿದಿರಲಿಲ್ಲ. ವಿಜ್ಞಾನಿ ಯುವಾನ್ ರಚಿಸಿದ ಕಂಪ್ಯೂಟರ್ ಚಿತ್ರಣದಿಂದ ಈ ರಹಸ್ಯ ಬಯಲಾಗಿದೆ.



ಅಮ್ಮನ ದಾರಿ ಬೇಡವೆಂದು ತಾನೇ ಮರಿಗಳು ಈಜಿದ್ದಾದರೆ, ಅವುಗಳು ಈಜಲು ತಮ್ಮ ಕಾಲುಗಳ ಸಹಾಯದಿಂದ ನೀರನ್ನು ಹಿಂದೆ ತಳ್ಳಿ ತಾವು ಮುಂದೆ ಸಾಗುತ್ತವೆ. ಇದು ಎಲ್ಲರಿಗೂ ತಿಳಿದ ವಿಷಯ. ಆದರೆ ಹಾಗೆ ಈಜುವುದರಿಂದ ತಾನು ಉತ್ಪಾದಿಸಿದ ನೀರಿನ ಅಲೆಗಳು, ಬಾತುಗಳು ಮುಂದೆ ಸಾಗುವ ವೇಗವನ್ನು ಸ್ವಲ್ಪ ಕ್ಷೀಣಿಸುತ್ತವೆ. ಇದನ್ನು ನೀರಿನ ಅಲೆತಡೆ ಅಥವಾ ವೇವ್ ಡ್ರ್ಯಾಗ್ ಎಂದು ಕರೆಯುತ್ತಾರೆ. ಹೀಗಾಗುವುದನ್ನು ತಪ್ಪಿಸಬೇಕೆಂದರೆ, ಅವುಗಳು ಅಮ್ಮನ ಹಿಂದೆ ಚಲಿಸಬೇಕು. ಹೀಗೆ ಚಲಿಸುವುದರಿಂದ ಅಮ್ಮ ಉತ್ಪಾದಿಸಿದ ಅಲೆಗಳು ಮರಿಗಳ ವೇಗವನ್ನು ಕ್ಷೀಣಿಸುವ ಬದಲು ಅವುಗಳನ್ನು ಮುಂದೆ ದೂಡುತ್ತವೆ. ಹೀಗೆ ಮಾಡುವುದರಿಂದ ಮರಿಗಳು ಸ್ವಲ್ಪವೇ ಶಕ್ತಿ ಬಳಸಿ ಚಲಿಸಬಹುದು. ಇದರ ಪ್ರಯೋಜನವನ್ನು ಪಡೆಯಬೇಕೆಂದರೆ ಉಳಿದ ಮರಿಗಳೂ ಸಹ ಶಿಸ್ತಿನ ಸಿಪಾಯಿಗಳಂತೆ ಒಂದರ ಹಿಂದೆ ಒಂದರಂತೆ ಸಾಲಾಗಿ ಹೋಗಬೇಕು. ಜೊತೆಗೆ ಅಮ್ಮನ ಈಜಿನ ವೇಗಕ್ಕೆ ಅವುಗಳ ವೇಗವನ್ನು ಹೊಂದಿಸಿಕೊಂಡಿರಬೇಕು. ಇಷ್ಟು ಮಾಡಿದರೆ ಮುಗಿಯಿತು. ತಾವು ಸ್ವತಃ ಈಜುವಾಗ ಬಳಸುವ ಶಕ್ತಿಗಿಂತ ಕಡಿಮೆ ಶಕ್ತಿಯಲ್ಲಿಯೇ ತಲುಪಬೇಕಿರುವ ಜಾಗ ತಲುಪಬಹುದು. ಅದೇ ಅಮ್ಮನ ದಾರಿ ಬಿಟ್ಟು ಕದಲಿದರೆ ಅನಗತ್ಯ ಹೆಚ್ಚು ಶಕ್ತಿ ಬಳಸಿ ಈಜಬೇಕಾಗುತ್ತದೆ ನಾವು ನಮ್ಮ ಮಾರ್ಗದರ್ಶಕರ ತೊರೆದು ಸ್ವತಃ ನಮ್ಮ ದಾರಿ ಹಿಡಿದಂತೆ.

ನೋಡಿದಿರಾ ಹೀಗೆ ಸಾಲಾಗಿ ಹೋಗುವ ಶಿಸ್ತು, ಹಿರಿಯರ ದಾರಿಯಲ್ಲಿ ಸಾಗಿದರೆ ಆಗುವ ಅನುಕೂಲಗಳು ನಮಗಿಂತ ಹೆಚ್ಚು ಪ್ರಾಣಿ, ಪಕ್ಷಿ, ಕೀಟಗಳಿಗೇ ಹೆಚ್ಚಿದೆ. ನಾವೂ ಹಾಗೆ ಹಿರಿಯರು ತೋರಿದ ಸರಿಯಾದ ದಾರಿಯಲ್ಲಿ ಸಾಗುವ ಕೆಲಸ ಈಗಿನ ಕಾಲದಲ್ಲಿ ಹೆಚ್ಚೆಚ್ಚು ಮಾಡಬೇಕಿದೆ. ಏಕೆಂದರೆ, ಕೆಲವು ನಮಗೆ ತಿಳಿದ ಹಾಗೆ ಇನ್ನು ಕೆಲವು ತಿಳಿಯದ ಹಾಗೆ ನಮ್ಮ ಸುತ್ತಲಿನ ಪರಿಸರ, ಎಷ್ಟೋ ಜೀವರಾಶಿಗಳ ಜೊತೆಗಿನ ಸೌಹಾರ್ದ ಜೀವನದಿಂದ ದಾರಿತಪ್ಪಿಬಿಟ್ಟಿದ್ದೇವೆ. ನಮ್ಮ ಹಾಗೆ ಕೇವಲ ಕಾಗದದ ಸ್ನಾತಕ ಪದವಿಗಳಿರದ ನಮ್ಮ ಹಿರಿಯರು ಎಷ್ಟೋ ಜೀವರಾಶಿಗಳೊಂದಿಗೆ ಸಹಯೋಗದಿಂದ ಬದುಕುವ ದಾರಿ ಕಂಡುಕೊಂಡಿದ್ದರು. ಆದರೆ ಈಗಿನ ಪದವಿಗಳು ನಮ್ಮ ನಿತ್ಯ ಅನರ್ಥ ಜೀವನ ಸಾಗಿಸಲು ಬೇಕಾದ ಗಾಂಧಿ ಮುದ್ರಿತ ಕಾಗದಗಳನ್ನು ಗಳಿಸಲು ಮಾತ್ರ ಯೋಗ್ಯವಾಗುವ ಹಾಗೆ ಬದುಕುತ್ತಿದ್ದೇವೆ. ನಾವು ನಮ್ಮ ಜೀವನದ ಬಹುಮುಖ್ಯವಾದ ಪ್ರಪಂಚವನ್ನು ಅರಿಯುವ ಬಾಲ್ಯಾವಸ್ಥೆಯಿಂದ ಕಲಿಯುವ ಶಿಕ್ಷಣ ನಮ್ಮನ್ನು ನಮ್ಮ ನೆರೆ-ಹೊರೆಯವರೊಂದಿಗೆ ಹರ್ಷ-ಅನ್ಯೋನ್ಯತೆಗಳಿಂದ ಬದುಕಲು ಕಲಿಸದಿದ್ದರೆ, ಅಂತಹ ಶಿಕ್ಷಣದ ಉದ್ದೇಶವೇ ದಾರಿ ತಪ್ಪಿದ ಹಾಗೆ ಅಲ್ಲವೇ...!


© cc_heubach-duck-fdb9fd-1024

**ಮೂಲ ಲೇಖನ:** ScienceNewsforStudents



**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ಹೂವೇ,

ಹೂವೇ,
ಚೆಂದದಿ ಮುಗುಳ್ನಗೆಯ ಬೀರುತಲಿರುವೆ,
ನಿನ್ನಂತೆ ನನಗಿರುವ ಆಸೆ ತಂದಿರುವೆ,
ಹರಡುತಿರು ಹೀಗೆ ನಿನ್ನೊಡಲ ಕಂಪು,
ನೋಡುಗರ ಕಣ್ಣಳಿಗೆ ಅದುವೇ ತಂಪು.

ಹೂವೇ,
ಹಕ್ಕಿ, ಕೀಟಗಳಿಗೆ ಮಕರಂದ ನೀ ನೀವೆ,
ಗಿಡದ ಸೌಂದರ್ಯಕೆ ನೀನೇ ಒಡವೆ,
ನಾನಾ ಬಣ್ಣಗಳಲಿ ನೀ ಎಲ್ಲರ ಸೆಳೆವೆ,
ತಾಜಾತನಕೆ ನೀ ಹೆಸರಾಗಿರುವೆ.

ಹೂವೇ,
ಕಾಯಾಗಿ, ಹಣ್ಣಾಗಿ ಮತ್ತೆ ಹುಟ್ಟಿ ಬರುವೆ,
ನಿಸರ್ಗದ ಅತಿ ಮುಖ್ಯ ಭಾಗವಾಗಿರುವೆ,
ಮೃದುತನಕೆ ಕೋಮಲತೆಗೆ ನೀನೊಂದು ಸಂಕೇತ,
ಚಿಟ್ಟೆ, ದುಂಬಿಗಳು ನಿನಗಾಗಿ ಹಾಡುವವು ಸಂಗೀತ.

ಹೂವೇ,
ಕಲಿಸು ನನಗೆ ನಿನ್ನಂತೆ ಇರಲು,
ಎಲೆ ಮರೆಯ ಕಾಯಾಗಿ ವಿನಯದಿಂದಿರಲು,
ಬೆಳಕಿನೆಡೆಗೆ ತಲೆ ಎತ್ತಿ ನಿಲ್ಲಲು,
ಕಾಲಚಕ್ರಕೆ ಹೊಂದಿಕೊಂಡು ನಡೆಯಲು.

- ದೀಪಿಕಾಬಾಯಿ ಎನ್.
ಬೆಂಗಳೂರು ಜಿಲ್ಲೆ

# ಪ್ರಕೃತಿ ಬಿಂಬ



**ಕಾಡು ಕುರಿ** © **ಸನತ್ ಶಾನುಭೋಗ**

ಮುಂಟ್ಯಾಕ್ ಎಂದು ಕರೆಯಲ್ಪಡುವ ಈ ಕಾಡು ಕುರಿಗಳು, ದಕ್ಷಿಣ ಮತ್ತು ಆಗ್ನೇಯ ಏಷ್ಯಾದ ಗುಡ್ಡಗಾಡು, ತೇವಾಂಶವಿರುವ ಎಲೆ ಉದುರುವ ಹಾಗೂ ನಿತ್ಯಹರಿದ್ವರ್ಣದ ಕಾಡುಗಳಲ್ಲಿ ಕಂಡುಬರುವ ಸ್ಥಳೀಯ ಜಿಂಕೆಗಳಾಗಿವೆ. ಕಾಡು ಕುರಿಗಳನ್ನು ಅದರ ಪುಟ್ಟ ಗಾತ್ರ, ತಲೆಯ ಮೇಲಿನ ಕೊಂಬು ಮತ್ತು ಪುಟ್ಟ ಕೋರೆ ಹಲ್ಲುಗಳಿಂದ ಗುರುತಿಸಬಹುದು. ಕಾಡು ಕುರಿಗಳು ಸಾಧಾರಣವಾಗಿ ಸಂಜೆ ಮತ್ತು ರಾತ್ರಿಗಳಲ್ಲಿ ಹೆಚ್ಚಾಗಿ ಸಂಚಾರ ಮಾಡುವುದರಿಂದ ಹಗಲಿನಲ್ಲಿ ಇವನ್ನು ಕಾಣುವುದು ಕೊಂಚ ಕಠಿಣ. ಬೇಟೆಗಾರ ಪ್ರಾಣಿಗಳನ್ನು ಕಂಡ ಕೂಡಲೆ ಜೋರಾಗಿ ಬೊಗಳಿಕೆಯಂತಹ ಧ್ವನಿಯಲ್ಲಿ ಕೂಗಿ, ಇತರೆ ಪ್ರಾಣಿಗಳಿಗೆ ಎಚ್ಚರಿಕೆಯನ್ನು ನೀಡುತ್ತವೆ. ಹುಲ್ಲು, ಎಲೆ, ಸೊಪ್ಪು ಮತ್ತು ಮರದಿಂದ ಉದುರಿದ ಹಣ್ಣು ಹಾಗೂ ಬೀಜಗಳು ಈ ಪ್ರಾಣಿಯ ಮುಖ್ಯ ಆಹಾರವಾಗಿದೆ.



**ಚುಕ್ಕೆ ಜಿಂಕೆ** © **ಸನತ್ ಶಾನುಭೋಗ**

ಸರ್ವಿಡೇ ಕುಟುಂಬಕ್ಕೆ ಸೇರುವ ಈ ಚುಕ್ಕೆ ಜಿಂಕೆಗಳು ಯಥೇಚ್ಛವಾಗಿ ಭಾರತದ ಹುಲ್ಲುಗಾವಲು ಹಾಗೂ ಎಲೆ ಉದುರುವ ಕಾಡುಗಳಲ್ಲಿ ಕಂಡುಬರುವ ಸ್ಥಳೀಯ ಜಿಂಕೆಗಳಾಗಿವೆ. ಮೈ ಬಣ್ಣವು ಬಿಳಿಯ ಚುಕ್ಕೆಗಳನ್ನೊಳಗೊಂಡ ಕಂದು ಬಣ್ಣದ್ದಾಗಿದ್ದು, ಗಂಡು ಹೆಣ್ಣಿಗಿಂತ ಗಾತ್ರದಲ್ಲಿ ದೊಡ್ಡದಾಗಿರುತ್ತದೆ ಹಾಗೂ ಕೊಂಬುಗಳನ್ನು ಹೊಂದಿದ್ದು, ವರುಷಕ್ಕೊಮ್ಮೆ ಕೊಂಬನ್ನು ಉದುರಿಕೊಳ್ಳುತ್ತವೆ. ಸಾಮಾನ್ಯವಾಗಿ ಗುಂಪುಗಳಲ್ಲಿ ವಾಸಿಸುವ ಇವುಗಳು, ನಿಧಾನಗತಿಯಲ್ಲಿ ಹುಲ್ಲು ಮೇಯುವುದನ್ನು ಕಾಣಬಹುದಾಗಿದೆ. ಸ್ವಭಾವತಃ ಸಂಕೋಚದ ಪ್ರಾಣಿಯಾದ ಕಾರಣ ಮಾನವರನ್ನು ಕಂಡ ತಕ್ಷಣ ಇವು ಓಡಿ ಮರೆಯಾಗುವವು. ಹುಲ್ಲು, ಎಲೆ, ಸೊಪ್ಪು ಮತ್ತು ಮರದಿಂದ ಉದುರಿದ ಹಣ್ಣು ಹಾಗೂ ಬೀಜಗಳು ಈ ಪ್ರಾಣಿಯ ಮುಖ್ಯ ಆಹಾರವಾಗಿದೆ.



**ಸಾರಂಗ** © **ಸನತ್ ಶಾನುಭೋಗ**

ಭಾರತ ಉಪಖಂಡ ಹಾಗೂ ಆಗ್ನೇಯ ಏಷ್ಯಾದ ಎಲೆ ಉದುರುವ, ಶುಷ್ಕ ಮತ್ತು ಒಣ ಕಾಡುಗಳಲ್ಲಿ, ಶೋಲಾ ಹುಲ್ಲುಗಾವಲು, ಪೈನ್, ಓಕ್ ಮತ್ತು ನಿತ್ಯಹರಿದ್ವರ್ಣದ ಕಾಡುಗಳಲ್ಲಿ ವ್ಯಾಪಕವಾಗಿ ಕಂಡುಬರುವ ಈ ಸಾರಂಗಗಳು, ಸರ್ವಿಡೇ ಕುಟುಂಬಕ್ಕೆ ಸೇರಿವೆ. ಸಾಮಾನ್ಯವಾಗಿ ತೇವಾಂಶವಿರುವ ಹಾಗೂ ಏರಿಳಿತಗಳಿರುವ ಭೂಪ್ರದೇಶದಲ್ಲಿ ವಾಸಿಸುತ್ತವೆ. ಈ ಜಿಂಕೆಗಳ ಒರಟಾದ ಚರ್ಮವು ಕಡುಗಂದು ಬಣ್ಣದ್ದಾಗಿದ್ದು, ಗಂಡು ಸಾರಂಗಗಳಲ್ಲಿ ಅಗಲವಾಗಿ ಹರಡಿಕೊಂಡ ಮತ್ತು ತುದಿಗಳಲ್ಲಿ ಕವಲೊಡೆದಿರುವಂತಹ ಕೊಂಬುಗಳನ್ನು ಕಾಣಬಹುದಾಗಿದೆ. ಇದು ಭಾರತದ ಅತಿ ದೊಡ್ಡ ಜಿಂಕೆಯಾಗಿದೆ.



**ಕೃಷ್ಣಮೃಗ** **© ಸನತ್ ಶಾನುಭೋಗ**

ಭಾರತ ಮತ್ತು ನೇಪಾಳದ ನೀರಿನ ಮೂಲಗಳಿರುವ ಹುಲ್ಲುಗಾವಲು, ಬಯಲು ಪ್ರದೇಶ ಮತ್ತು ಲಘುವಾದ ಅರಣ್ಯ ಪ್ರದೇಶಗಳಲ್ಲಿ ಕಂಡುಬರುವ ಈ ಕೃಷ್ಣಮೃಗಗಳು ಬೋವಿಡೇ ಕುಟುಂಬಕ್ಕೆ ಸೇರಿವೆ. ಕಾಲುಗಳ ಮೇಲಿನ ಭಾಗ ಮತ್ತು ಹೊರಭಾಗವು ಗಾಢ ಕಂದು ಬಣ್ಣ ಹಾಗೂ ಕಪ್ಪು ಬಣ್ಣದ್ದಾಗಿದ್ದರೆ, ಕೆಳಭಾಗ ಮತ್ತು ಒಳಭಾಗವು ಬಿಳಿಯಾಗಿರುತ್ತದೆ. ಗಂಡು ಕೃಷ್ಣಮೃಗಗಳ ಮೈ ಬಣ್ಣವು ಕಡುಗಂದು ಅಥವಾ ಕಪ್ಪಾಗಿದ್ದು, ಉದ್ದದ ಸುರುಳಿಯಾಕಾರದ ಕೊಂಬುಗಳನ್ನು ಹೊಂದಿರುತ್ತವೆ. ಹೆಣ್ಣು ಕೃಷ್ಣಮೃಗವು ಹಳದಿ ಅಥವಾ ಕಂದು ಬಣ್ಣದ್ದಾಗಿರುತ್ತದೆ. ಕಣ್ಣು ಸುತ್ತ ಬಿಳಿಯ ಸುರುಳಿಯಾಕಾರದ ಬಣ್ಣವನ್ನೂ ಸಹ ಹೊಂದಿರುತ್ತವೆ. ಇವು ಗುಂಪುಗಳಲ್ಲಿ ಹುಲ್ಲು ಮೇಯುವುದನ್ನು ಕಾಣಬಹುದಾಗಿದೆ.

**ಚಿತ್ರ: ಸನತ್ ಶಾನುಭೋಗ**

**ಲೇಖನ: ದೀಪ್ತಿ ಎನ್.**

# ನೀವೂ ಕಾನನಕ್ಕೆ ಬರೆಯಬಹುದು



© ಧನರಾಜ್ ಎಂ.

ಭೂಮಿಯ ಅತ್ಯಂತ ವೈಶಿಷ್ಟ್ಯಪೂರ್ಣ ಜೀವಿಗಳಲ್ಲಿ ಘೇಂಡಾಮೃಗ ಒಂದು. ಘೇಂಡಾಮೃಗಗಳು ಸಾಮಾನ್ಯವಾಗಿ ಒಂಟಿಯಾಗಿಯೇ ವಾಸಿಸುತ್ತವೆ. ಇವು ನಿಶಾಚರಿಗಳು. ಸಂಜೆಯಿಂದ ಮುಂಜಾವಿನವರೆಗೂ ಆಹಾರಾನ್ವೇಷಣೆಯಲ್ಲಿ ತೊಡಗಿರುತ್ತವೆ. ಹಗಲೆಲ್ಲ ಯಾವುದಾದರೂ ಏಕಾಂತದ ಸ್ಥಳದಲ್ಲಿ ಮಲಗಿರುತ್ತವೆ. ಬಿಸಿಲಿನ ತಾಪ ಹೆಚ್ಚಾದಾಗ ಕೆಸರು ನೀರಿನಲ್ಲಿ ಹೊರಳಾಡುತ್ತವೆ, ನದಿಗಳಲ್ಲಿ ಈಜುತ್ತ ಕಾಲಕಳೆಯುವುದೆಂದರೆ ಇವುಗಳಿಗೆ ಬಲು ಅಚ್ಚುಮೆಚ್ಚು. ಎಲ್ಲ ಬಗೆಯ ಘೇಂಡಾಮೃಗಗಳೂ ಸಂಪೂರ್ಣ ಸಸ್ಯಾಹಾರಿಗಳು. ಇತ್ತೀಚಿನ ವರ್ಷಗಳಲ್ಲಿ ನಗರೀಕರಣ, ಹವಾಮಾನ ಬದಲಾವಣೆ ಮೊದಲಾದ ಅಂಶಗಳಿಂದ ಘೇಂಡಾಮೃಗದಂತಹ ಅಪರೂಪದ ಜೀವಿಗಳು ಅಳಿವಿನತ್ತ ಸಾಗುತ್ತಿವೆ. ಘೇಂಡಾಮೃಗಗಳ ವಿಶೇಷವಾದ ಕೊಂಬುಗಳಿಗೆ ಅವುಗಳನ್ನು ಬೇಟೆಯಾಡುತ್ತಿದ್ದಾರೆ. ಇದನ್ನು ತಡೆದು, ಘೇಂಡಾಮೃಗಗಳ ಕುರಿತು ಸಾರ್ವಜನಿಕರಿಗೆ ತಿಳುವಳಿಕೆ ನೀಡಿ, ಅದನ್ನು ರಕ್ಷಿಸುವ ಸಲುವಾಗಿ ಪ್ರತಿವರ್ಷ ಸೆಪ್ಟೆಂಬರ್ 22 ರಂದು '**ವಿಶ್ವ ಘೇಂಡಾಮೃಗ ದಿನ**'ವನ್ನು ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.


**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ**:

ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪ್,
ಅಡವಿ ಫೀಲ್ಡ್ ಸ್ಟೇಷನ್,
ಒಂಟೆಮಾರನ ದೊಡ್ಡಿ,
ರಾಗಿಹಳ್ಳಿ ಅಂಚೆ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.